ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 09ನೇ ಮಾರ್ಚ್, 2020

2019-20 ನೇ ಸಾಲಿನಲ್ಲಿ ಭರ್ತಿಯಾಗದೇ ಉಳಿದಿರುವ ಸೀಟುಗಳ ಕುರಿತು

ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು)

466 (413) ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ವೈದ್ಯಕೀಯ ಶಿಕ್ಷಣ ಕಾಲೇಜುಗಳ ಪ್ರವೇಶ ಪ್ರಕ್ರಿಯೆ ಮುಗಿದ ಬಳಿಕ 2019-20 ನೇ ಶೈಕ್ಷಣಿಕ ವರ್ಷದ ಸಾಲಿನಲ್ಲಿ ಯಾವ ಯಾವ ಕಾಲೇಜುಗಳಲ್ಲಿ ಸರ್ಕಾರದ ಲೆಕ್ಕದಲ್ಲಿನ ಸೀಟುಗಳು ಭರ್ತಿಯಾಗದೆ ಉಳಿದಿರುತ್ತದೆ ; ಈ ಸೀಟುಗಳು ಯಾವ ವರ್ಗಕ್ಕೆ ಸೇರಿದವುಗಳಾಗಿವೆ ; ಇದರಲ್ಲಿ ಸಾಮಾನ್ಯ ವರ್ಗಕ್ಕೆ ಸೇರಿದ ಸೀಟುಗಳ ಸಂಖ್ಯೆ ಎಷ್ಟು ; (ಕಾಲೇಜುವಾರು, ಜಿಲ್ಲಾವಾರು ವಿವರ ನೀಡುವುದು)

(ಆ) 2019-20 ನೇ ಶೈಕ್ಷಣಿಕ ವರ್ಷದ ಸಾಲಿನಲ್ಲಿ ಎನ್.ಆರ್.ಐ ಕೋಟಾದ ಎಷ್ಟು ಸೀಟುಗಳನ್ನು ಸರ್ಕಾರಕ್ಕೆ ವೈದ್ಯಕೀಯ ಶಿಕ್ಷಣ ಕಾಲೇಜುಗಳು ಬಿಟ್ಟು ಕೊಟ್ಟಿದ್ದವು ; ಇವುಗಳಲ್ಲಿ ಎಷ್ಟು ಸೀಟುಗಳನ್ನು ಸರ್ಕಾರ ಭರ್ತಿ ಮಾಡಿತ್ತು ; ವೈದ್ಯಕೀಯ ಕಾಲೇಜುಗಳ ಆಡಳಿತ ಮಂಡಳಿಗೆ ಸರ್ಕಾರ ಹಿಂತಿರುಗಿಸಿದ ಸೀಟುಗಳ ಸಂಖ್ಯೆ ಎಷ್ಟು ; (ಕಾಲೇಜುವಾರು, ಜಿಲ್ಲಾವಾರು ವಿವರ ನೀಡುವುದು)

(ಇ) 2019-20 ನೇ ಸಾಲಿನಲ್ಲಿ ವೈದ್ಯಕೀಯ ಶಿಕ್ಷಣ ಕಾಲೇಜುಗಳ ಪ್ರವೇಶ ಮುಗಿಯಲು ಸರ್ಕಾರವು ನಿಗದಿಪಡಿಸಿದ ಕೊನೆಯ ದಿನಾಂಕ ಯಾವುದು ; ಪ್ರವೇಶ ಪ್ರಕ್ರಿಯೆ ಮುಗಿದ ಬಳಿಕ ಸರ್ಕಾರ ಹಿಂತಿರುಗಿಸಿದ ಸೀಟುಗಳನ್ನು ಆಡಳಿತ ಮಂಡಳಿಯವರು ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕ ಯಾವುದು;

(ಈ) 2019-20 ನೇ ಸಾಲಿನಲ್ಲಿ ಪ್ರವೇಶ ಪ್ರಕ್ರಿಯೆ ಮುಗಿದ ನಂತರ ಉಳಿದ ವೈದ್ಯಕೀಯ ಸೀಟುಗಳನ್ನು ಆಡಳಿತ ಮಂಡಳಿಗೆ ಹಿಂತಿರುಗಿಸಿದ ಬಳಿಕ ಯಾವ ರ್ಯಾಂಕಿನ ವಿದ್ಯಾರ್ಥಿಯವರೆಗೆ ಪ್ರವೇಶಾವಕಾಶ ದೊರಕಿದೆ ; SC/ST, OBC, GNL ಅಭ್ಯರ್ಥಿಗಳಲ್ಲಿ ಯಾವ ರ್ಯಾಂಕಿನ ಅಭ್ಯರ್ಥಿಯವರೆಗೆ ಪ್ರವೇಶಾವಕಾಶ ದೊರಕಿದೆ ?